# ಕರ್ನಾಟಕ ವಿಧಾನ ಪರಿಷತ್ತು.

| | | |
|---|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | : | 188 (320) |
| ಸದಸ್ಯರ ಹೆಸರು | : | ಶ್ರೀ ಮರಿತಿಬ್ಬೇಗೌಡ (ಶಿಕ್ಷಕರ ಕ್ಷೇತ್ರ). |
| ಉತ್ತರಿಸಬೇಕಾದ ದಿನಾಂಕ | : | 14.09.2021 |
| ಉತ್ತರಿಸಬೇಕಾದ ಸಚಿವರು | : | ನಗರಾಭಿವೃದ್ಧಿ ಸಚಿವರು. |

********

| ಕ್ರ.ಸಂ | ಪ್ರಶ್ನೆ | ಉತ್ತರ |
|---|---|---|
| ಅ | ಮೈಸೂರು ನಗರಾಭಿವೃದ್ಧಿ ಪ್ರಾಧಿಕಾರವು, ಬಡಾವಣೆ ರಚನೆ ಮಾಡುವ ಸಮಯದಲ್ಲಿ ಭೂಸ್ವಾಧೀನಪಡಿಸಿಕೊಳ್ಳದಿರುವ ಭೂಮಿಯನ್ನು ಉಪಯೋಗಿಸಿಕೊಂಡು, ಭೂ ಮಾಲೀಕರಿಗೆ ಅದೇ ಪ್ರಮಾಣದ ಭೂಮಿಯನ್ನು ಪ್ರಾಧಿಕಾರ ಹಂಚಿಕೆ ಮಾಡದೆ ಇರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಸರ್ಕಾರದ ಗಮನಕ್ಕೆ ಬಂದಿರುತ್ತದೆ.<br><br>ಮೈಸೂರು ನಗರಾಭಿವೃದ್ಧಿ ಪ್ರಾಧಿಕಾರದಿಂದ ಭೂಸ್ವಾಧೀನ ಪಡಿಸಿಕೊಳ್ಳದೆ ಉಪಯೋಗಿಸಿಕೊಳ್ಳಲಾದ ಜಮೀನುಗಳಿಗೆ ಭೂಮಾಲೀಕರು ಒಪ್ಪಿದಂತಹ ಪ್ರಕರಣಗಳಲ್ಲಿ ಅಭಿವೃದ್ಧಿ ಹೊಂದಿದ ಶೇ.50 ರಷ್ಟು ಜಾಗವನ್ನು ಪ್ರಾಧಿಕಾರದ ವತಿಯಿಂದ ನೀಡಲಾಗುತ್ತಿದೆ. ರೈತರು/ ಭೂಮಾಲೀಕರು ಒಪ್ಪದಂತಹ ಪ್ರಕರಣಗಳಲ್ಲಿ ಭೂಸ್ವಾಧೀನ ಕಾಯ್ದೆ, 2013 ರಲ್ಲಿನ ಅವಕಾಶಗಳಂತೆ ಪ್ರಾಧಿಕಾರದ ವತಿಯಿಂದ ಕ್ರಮವಹಿಸಲಾಗುತ್ತಿದೆ. |
| ಆ | ಭೂ ಮಾಲೀಕರಿಗೆ 50:50 ಅನುಪಾತದಲ್ಲಿ ಮಾತ್ರ ಭೂಮಿಯನ್ನು ಪ್ರಾಧಿಕಾರವು ನೀಡುವುದಾಗಿ ತಿಳಿಸುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಸರ್ಕಾರದ ಗಮನಕ್ಕೆ ಬಂದಿರುತ್ತದೆ.<br><br>ಭೂಸ್ವಾಧೀನ ಪಡಿಸದೇ ಉಪಯೋಗಿಸಿಕೊಳ್ಳಲಾಗಿರುವ ಪ್ರಕರಣಗಳಲ್ಲಿ ಶೇ 50 ರಷ್ಟು ಅಭಿವೃದ್ಧಿಪಡಿಸಿದ ಜಾಗ ಪಡೆಯಲು ಭೂ ಮಾಲೀಕರು ಒಪ್ಪಿದಲ್ಲಿ, ಸರ್ಕಾರದ ಆದೇಶ ಸಂಖ್ಯೆ: UDD 08 TTP 2014 ದಿನಾಂಕ: 11.02.2015 ರಲ್ಲಿನ ಅವಕಾಶದನ್ವಯ ಪರಿಹಾರ ನೀಡಲು ಪ್ರಾಧಿಕಾರವು ಕ್ರಮವಹಿಸುತ್ತಿದೆ. |
| ಇ | ಭೂಸ್ವಾಧೀನ ಪಡಿಸಿಕೊಳ್ಳದೆ ಪ್ರಾಧಿಕಾರ ಉಪಯೋಗಿಸಿಕೊಂಡಿರುವ ಅಷ್ಟೇ ಪ್ರಮಾಣದ ಭೂಮಿಗೆ ಬದಲಾಗಿ ಅಷ್ಟೇ ಪ್ರಮಾಣದ ಭೂಮಿಯನ್ನು ಕೊಡದಿರುವುದರಿಂದ ರೈತರುಗಳು ತೊಂದರೆಗೊಳಗಾಗಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಸರ್ಕಾರದ ಗಮನಕ್ಕೆ ಬಂದಿರುತ್ತದೆ.<br><br>ಭೂಸ್ವಾಧೀನಪಡಿಸಿಕೊಳ್ಳುವ ಸಂದರ್ಭದಲ್ಲಿ ರೈತರ/ ಭೂಮಾಲೀಕರ ಜಮೀನಿನ ಮೌಲ್ಯವನ್ನು ಕೃಷಿ ಭೂಮಿಯ ಮೌಲ್ಯಕ್ಕೆ ನಿಗಧಿಪಡಿಸಿ ಭೂಪರಿಹಾರ ನೀಡಲಾಗುತ್ತದೆ. ಭೂಸ್ವಾಧೀನ ಪಡಿಸಿಕೊಳ್ಳದೇ ಪ್ರಾಧಿಕಾರದಿಂದ ಉಪಯೋಗಿಸಿಕೊಂಡಂತಹ ಭೂಮಿಗೆ ಅಭಿವೃದ್ಧಿಪಡಿಸಿದ ಜಾಗವನ್ನು ನೀಡುವುದರಿಂದ, ಸದರಿ ಅಭಿವೃದ್ಧಿ ಪಡಿಸಿದ ಜಾಗದ ಮೌಲ್ಯವು ಕೃಷಿ ಜಾಗದ ಮೌಲ್ಯಕಿಂತ ಹೆಚ್ಚಾಗಿರುವುದರಿಂದ ರೈತರು/ ಭೂಮಾಲೀಕರಿಗೆ ಹೆಚ್ಚಿನ ಲಾಭದಾಯಕವಾಗಿರುತ್ತದೆ. ಆದ್ದರಿಂದ ಈ ವಿಷಯದಲ್ಲಿ ರೈತರು/ ಭೂಮಾಲೀಕರಿಗೆ ತೊಂದರೆಯಾಗಿರುವುದಿಲ್ಲ. |
| ಈ | ಹಾಗಿದ್ದಲ್ಲಿ, ಈ ಸಂಬಂಧ ಭೂ ಮಾಲೀಕರಿಗೆ ಅಷ್ಟೇ ಪ್ರಮಾಣದ ಭೂಮಿಯನ್ನು ನೀಡಲು ಸರ್ಕಾರ ಯಾವ ಕ್ರಮವನ್ನು ಯಾವ ಕಾಲಮಿತಿಯಲ್ಲಿ ಕೈಗೊಳ್ಳಲಾಗುವುದು? | |

ಸಂಖ್ಯೆ: ನಅಇ348 ಮೈಅಪ್ರಾ 2021 (ಇ)

(ಬಿ.ಎ. ಬಸವರಾಜ)
ನಗರಾಭಿವೃದ್ಧಿ ಸಚಿವರು